# ಶಿಕ್ಷಕ ಕಲಿಕೆ ಕೇಂದ್ರ: ಶಿಕ್ಷಕ ಅಭಿವೃದ್ಧಿಗೆ ಪರಿಣಾಮಕಾರೀ ಅವಕಾಶ

ರುದ್ರೇಶ. ಎಸ್

ಶಾಲೆಯ ಗುಣಮಟ್ಟವು ಅದರಲ್ಲಿನ ಶಿಕ್ಷಕರ ಗುಣಮಟ್ಟವನ್ನು ಅವಲಂಬಿಸಿದೆ. ಮಕ್ಕಳು ಶಾಲೆಯಲ್ಲಿ ಏನನ್ನು ಕಲಿಯುತ್ತಾರೆ ಎನ್ನುವುದು ಶಿಕ್ಷಕರು ಏನನ್ನು ಮತ್ತು ಹೇಗೆ ಕಲಿಸುತ್ತಾರೆ ಎನ್ನುವುದರ ಜೊತೆ ನೇರವಾದ ಸಂಬಂಧವನ್ನು ಹೊಂದಿದೆ. ಶಿಕ್ಷಕರು ಏನನ್ನು ಕಲಿಸುತ್ತಾರೆ ಮತ್ತು ಹೇಗೆ ಕಲಿಸುತ್ತಾರೆ ಎನ್ನುವುದು ಮತ್ತೆ ತಿರುಗಿ, ಶಿಕ್ಷಕರ ಜ್ಞಾನ, ಕೌಶಲ್ಯ, ಪ್ರೇರಣೆ ಹಾಗೂ ಬದ್ಧತೆಯನ್ನು ಅವಲಂಬಿಸಿದೆ. ಶಾಲಾ ಶಿಕ್ಷಕರು ತಮ್ಮ ಬೋಧನೆಯ ವಿಧಾನದಲ್ಲಿ ಗಮನಾರ್ಹ ಬದಲಾವಣೆಗಳನ್ನು ಮಾಡಿಕೊಳ್ಳಬೇಕು ಎಂದು ನಿರೀಕ್ಷಿಸಿದರೆ, ಆ ಬದಲಾವಣೆಗಳನ್ನು ಮೊದಲೇ ತಂದಿರಬೇಕು ಮತ್ತು ಶಿಕ್ಷಕರ ಸೇವಾಪೂರ್ವ ಶಿಕ್ಷಣ ಹಾಗೂ ಸೇವಾನಿರತ ಶಿಕ್ಷಕರ ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಅವುಗಳನ್ನು ಅಳವಡಿಸಿರಬೇಕು. ಸರ್ಕಾರೀ ಶಾಲೆಗಳಲ್ಲಿನ ಅನೇಕ ಶಿಕ್ಷಕರು ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳುವ, ಹೊಸ ವಿಚಾರಗಳನ್ನು ಕಲಿಯುವ ಹಾಗೂ ತರಗತಿ ಕೋಣೆಯಲ್ಲಿನ ಅಗತ್ಯಗಳಿಗೆ ತಕ್ಕಂತೆ ಬದಲಾವಣೆಗಳನ್ನು ಅಳವಡಿಸಿಕೊಳ್ಳುವ ಮನಸ್ಸನ್ನು ಹೊಂದಿದ್ದಾರೆ. ಬಹುದೊಡ್ಡ ಸಂಖ್ಯೆಯ ಸರ್ಕಾರೀ ಶಾಲಾ ಶಿಕ್ಷಕರು ಗ್ರಾಮೀಣ ಭಾಗಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ತಮ್ಮ ವಿಷಯ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಮತ್ತು ದೈನಂದಿನ ಶೈಕ್ಷಣಿಕ ಸವಾಲುಗಳನ್ನು ನಿಭಾಯಿಸಲು ಅಗತ್ಯವಾದ ಬೆಂಬಲವನ್ನು ಪಡೆದುಕೊಳ್ಳಲು ಲಭ್ಯವಿರುವ ಸೌಕರ್ಯಗಳು ಹೇಗಿವೆ ಎಂಬುದನ್ನು ಪರಾಮರ್ಶಿಸಬೇಕು. ಶಿಕ್ಷಕರಿಗೆ ಶೈಕ್ಷಣಿಕ ಬೆಂಬಲವನ್ನು ಒದಗಿಸಲು ಸ್ಥಾಪಿಸಲಾದ ಮೂಲಭೂತ ವ್ಯವಸ್ಥೆಗಳನ್ನು ಅರ್ಥಮಾಡಿಕೊಳ್ಳುವುದೂ ಕೂಡ ಅಗತ್ಯವಾಗಿದೆ.

ವಾಸ್ತವದಲ್ಲಿ, ಶಿಕ್ಷಕರಿಗೆ ಅವರು ಕೆಲಸ ಮಾಡುವ ಜಾಗದಲ್ಲಿ ಶೈಕ್ಷಣಿಕ ಅಭಿವೃದ್ಧಿಗೆ ತುಂಬಾ ಕಡಿಮೆ ಅವಕಾಶವಿದೆ ಎನ್ನುವುದನ್ನು ಗಮನಿಸಬಹುದು. ಶಿಕ್ಷಕರ ವೃತ್ತಿಪರ ಅಭಿವೃದ್ಧಿಯನ್ನು ಕುರಿತಾಗಿ ಇರುವ ಒಂದೇ ಅಧಿಕೃತ ಚಟುವಟಿಕೆಯೆಂದರೆ, ಸರ್ವ ಶಿಕ್ಷಾ ಅಭಿಯಾನದಡಿಯಲ್ಲಿ (SSA) ನಡೆಸಲಾಗುವ ತರಬೇತಿ ಕಾರ್ಯಕ್ರಮಗಳು. ಅವುಗಳನ್ನು ಸ್ಥೂಲವಾಗಿ ಪ್ರತ್ಯೇಕಿತರೀತಿಯಲ್ಲಿ ಯೋಜಿಸಲಾಗಿದೆ. ಸರ್ಕಾರೀ ಶಾಲಾ ಶಿಕ್ಷಕರ ಹೊಣೆಗಾರಿಕೆಯು, ವಿಶೇಷವಾಗಿ ಕಡಿಮೆ ದಾಖಲಾತಿ ಮತ್ತು ವಿದ್ಯಾರ್ಥಿಗಳು ಶಾಲೆಯಲ್ಲಿ ಉಳಿಯುವ ಮಟ್ಟದ ಹಿನ್ನೆಲೆಯಲ್ಲಿ ಇಂದು ಬಹುಚರ್ಚಿತ ವಿಷಯವಾಗಿದೆ. ಶಿಕ್ಷಕರ ವೃತ್ತಿ ಸಾಮರ್ಥ್ಯವು ಅವರ ಹೊಣೆಗಾರಿಕೆಯನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ.

ಔಪಚಾರಿಕ ತರಬೇತಿ ಮತ್ತು ಕಮ್ಮಟಗಳು ಶಿಕ್ಷಕರ ವೃತ್ತಿಪರ ಅಭಿವೃದ್ಧಿಯನ್ನು ಕುರಿತಾಗಿ ನಡೆಯುತ್ತಿರುವ ಪ್ರಯತ್ನಗಳನ್ನು ಒಳಗೊಂಡಿವೆ. ಈ ತರಬೇತಿ ಗೋಷ್ಠಿಗಳನ್ನು ಒಂದು ನಿರ್ದಿಷ್ಟ ವಿಷಯದ ಮೇಲೆ ವರ್ಷಕ್ಕೆ ಎರಡು ಅಥವಾ ಮೂರು ತಂಡಗಳಲ್ಲಿ ಆಯೋಜಿಸಲಾಗುತ್ತದೆ. ಆದಾಗ್ಯೂ ವಸ್ತು ವಿಷಯಗಳು ಸಮಗ್ರವಾಗಿಲ್ಲ, ಅವುಗಳನ್ನು ಅವಸರದಲ್ಲಿ, ಸ್ಥೂಲವಾಗಿ ತೆಗೆದುಕೊಳ್ಳಲಾಗಿದೆ ಎನ್ನುವುದರ ಜೊತೆಗೆ ಈ ತರಬೇತಿ ಗೋಷ್ಠಿಗಳಲ್ಲಿ ಬಹುತೇಕವಾಗಿ ಶಿಕ್ಷಕರ ಅಗತ್ಯಗಳನ್ನು ಮತ್ತು ತರಗತಿ ಕೋಣೆಯಲ್ಲಿ ಉದ್ಭವಿಸುವ ಸಮಸ್ಯೆಗಳನ್ನು, ಶಿಕ್ಷಣದ ದೃಷ್ಟಿಕೋನ ಮತ್ತು ವಿಷಯವೊಂದರ ಸ್ವರೂಪದ ಕುರಿತಾಗಿ ಚರ್ಚಿಸಲು ಅವಕಾಶವೇ ಇರುವದಿಲ್ಲ. ಸತತವಾಗಿ ನಡೆಯುವ ಎರಡು ತರಬೇತಿ ಕಾರ್ಯಕ್ರಮಗಳಲ್ಲಿ ಚರ್ಚಿಸಲಾದ ವಿಷಯಗಳ ನಡುವೆ

ಸಂಬಂಧವೇ ಏರ್ಪಡುವುದಿಲ್ಲ. ಶಿಕ್ಷಕ ಅಭಿವೃದ್ಧಿ ಕಾರ್ಯದ ಗುಣಮಟ್ಟವು ಹೆಚ್ಚಲು ವರ್ಷಕ್ಕೆ ಎರಡಕ್ಕೂ ಹೆಚ್ಚಿನ ತರಬೇತಿ ಕಾರ್ಯಕ್ರಮಗಳ ಅಗತ್ಯವಿದೆ. ಶಿಕ್ಷಕರು ಔಪಚಾರಿಕ ಹಾಗೂ ಅನೌಪಚಾರಿಕ ಸಂವಾದಗಳಲ್ಲಿ ತೊಡಗುವಂತೆ ಅವಕಾಶವನ್ನು ಕಲ್ಪಿಸುವುದರ ಜೊತೆಗೆ ಶಿಕ್ಷಕರ ಅಗತ್ಯವನ್ನು ಆಧರಿಸಿ ಕಾರ್ಯಕ್ರಮಗಳ ಸ್ವರೂಪವನ್ನು, ಅವರು ನಿರಂತರವಾಗಿ ಅವುಗಳಲ್ಲಿ ತೊಡಗಿಕೊಳ್ಳುವಂತೆ ವಿನ್ಯಾಸ ಮಾಡುವ ಅವಶ್ಯಕತೆಯಿದೆ. ಇದು ಅಭಿವೃದ್ಧಿ ಪ್ರಕ್ರಿಯೆಯ ವೇಗವನ್ನು ಹೆಚ್ಚಿಸುತ್ತದೆ. ಅದಲ್ಲದೇ, ಶಿಕ್ಷಕರು, ಕಲಿಯಬೇಕಾದ ವಿಷಯವನ್ನು ಗುರುತಿಸಿ, ವೃತ್ತಿಪರ ಅಭಿವೃದ್ಧಿಯಲ್ಲಿ ಪಾಲ್ಗೊಳ್ಳಬೇಕೇ ಬೇಡವೇ ಎಂಬ ನಿರ್ಧಾರವನ್ನು ಸ್ವಾಯತ್ತವಾಗಿ ತೆಗೆದುಕೊಳ್ಳುವ ಹಾಗಿದ್ದಾಗ ಮಾತ್ರ ತರಬೇತಿ ಕಾರ್ಯಕ್ರಮಗಳು ಪರಿಣಾಮಕಾರಿಯಾಗಲು ಸಾಧ್ಯ.

ಅಜೀಂ ಪ್ರೇಮ್‌ಜಿ ಪ್ರತಿಷ್ಠಾನವು ಶಿಕ್ಷಕ ಕಲಿಕಾ ಕೇಂದ್ರದ (Teacher Learning Centre- ಟಿಎಲ್ಸಿ) ಪರಿಕಲ್ಪನೆಯನ್ನು ಹುಟ್ಟುಹಾಕಿದ್ದು ಇದರ ಉದ್ದೇಶವು ಶಿಕ್ಷಕರ ಅಭಿವೃದ್ಧಿಗೆ ಉಚಿತ ಹಾಗೂ ಸ್ವಇಚ್ಛೆಯಿಂದ ಅವಕಾಶವನ್ನು ಒದಗಿಸುವುದಾಗಿದೆ. ಇದು ಶಿಕ್ಷಕರನ್ನು ವೃತ್ತಿಪರ ಅಭಿವೃದ್ಧಿಯ ನಿರಂತರ ಪ್ರಕ್ರಿಯೆಯಲ್ಲಿ ತೊಡಗಿಸುವ ಕಾರ್ಯತಂತ್ರದ ಭಾಗವಾಗಿದೆ. ಟಿಎಲ್ಸಿಯ ಭೌತಿಕ ಅಸ್ತಿತ್ವವು ಕೇವಲ ಒಂದು ಹಂದರವಾಗಿದ್ದು ಅದುಕಲಿಕೆಯ ವಾತಾವರಣವನ್ನು ನಿರ್ಮಿಸುತ್ತದೆ. ಆದರೆ ಟಿಎಲ್ಸಿಯ ಜೀವದುಸಿರೆಂದರೆ ಅದರ ಆಶ್ರಯ, ಮಾರ್ಗದರ್ಶನದಲ್ಲಿ ನಡೆಯುವ ಮಾನವ ಅನುಸಂಧಾನಗಳು. ಖಿಐಅ ಮಾದರಿಯು ಪ್ರಸ್ತುತಜಾರಿಯಲ್ಲಿರುವ ಸೇವಾನಿರತ ಕಾರ್ಯಕ್ರಮಗಳಿಗೆ ವಿರುದ್ಧವಾಗಿ, ವೃತ್ತಿಪರಅಭಿವೃದ್ಧಿಯೆಡೆಗೆ ತಳಹಂತದಿಂದ ಮೇಲಕ್ಕೇರುವ ವಿಧಾನ. ಮೊದಲ ಟಿಎಲ್ಸಿಯು 2009ರಲ್ಲಿ ಕರ್ನಾಟಕದಯಾದಗೀರ್ ಜಿಲ್ಲೆಯ ಸುರಪುರ ತಾಲೂಕಿನಲ್ಲಿ ಸ್ಥಾಪನೆಯಾಯಿತು. ಈಗ ಅಜೀಂ ಪ್ರೇಮ್‌ಜಿ ಪ್ರತಿಷ್ಠಾನ ಕಾರ್ಯ ನಿರ್ವಹಿಸುವ ಎಲ್ಲಾ ಆರು ರಾಜ್ಯಗಳಲ್ಲಿಯೂ ಟಿಎಲ್ಸಿಗಳು ಹರಡಿವೆ. ಅವುಗಳಲ್ಲಿ 72 ಟಿಎಲ್ಸಿಗಳು ಉಪಖಂಡದುದ್ದಕ್ಕೂ ಇರುವ 44 ಜಿಲ್ಲೆಗಳಲ್ಲಿ ಅದರಲ್ಲಿಯೂ ಬಹುತೇಕವಾಗಿ ಗ್ರಾಮೀಣ ಪ್ರದೇಶಗಳಲ್ಲಿವೆ. ಶಿಕ್ಷಕರ ವೃತ್ತಿಪರ ಅಭಿವೃದ್ಧಿಯ ಕ್ಷೇತ್ರದಲ್ಲಿನ ನಮ್ಮ ಅನುಭವಗಳು ದೃಢಪಡಿಸುವುದೇನೆಂದರೆ, ಶಿಕ್ಷಕರನ್ನು ತಲುಪಲು ಹಾಗೂ ಅವರನ್ನು ಶೈಕ್ಷಣಿಕವಾಗಿ ತೊಡಗಿಸಲು ಟಿಎಲ್ಸಿಗಳು ಅತ್ಯಂತ ಸ್ಥಿರವಾದ ಹಾಗೂ ಕಡಿಮೆ ವೆಚ್ಚದ ವಿಧಾನವಾಗಿದೆ. ಆದ್ದರಿಂದ, ಪ್ರಸಕ್ತ ಶೈಕ್ಷಣಿಕ ವರ್ಷದಲ್ಲಿ ಮತ್ತೆ 60 ಟಿಎಲ್ಸಿಗಳನ್ನು ಹಾಗೂ ಮುಂಬರುವ ಕೆಲ ವರ್ಷಗಳ ಅವಧಿಯಲ್ಲಿ ದೇಶದುದ್ದಕ್ಕೂ 300 ಕ್ಕೂ ಹೆಚ್ಚು ಟಿಎಲ್ಸಿಗಳನ್ನು ಸ್ಥಾಪಿಸುವ ಯೋಜನೆಯನ್ನು ರೂಪಿಸಲಾಗಿದೆ.

ಶಿಕ್ಷಕ ಕಲಿಕಾ ಕೇಂದ್ರದ (ಟಿಎಲ್ಸಿ) ಎಂದರೇನು?

ಟಿಎಲ್ಸಿ ಎನ್ನುವುದು ಶಿಕ್ಷಕರಿಗೆ ತಮ್ಮ ವಿಷಯದಲ್ಲಿ ತೊಡಗಿಕೊಳ್ಳಲು ಒದಗಿಸಲಾಗುವ ಔಪಚಾರಿಕ, ಅನೌಪಚಾರಿಕ ಹಾಗೂ ಅಸಾಂಪ್ರದಾಯಿಕ ಅವಕಾಶಗಳನ್ನು ಒದಗಿಸುವ ಒಂದು ಮುಕ್ತ ಸ್ಥಳ. ಅದರ ಶೈಕ್ಷಣಿಕ ಸಂಪನ್ಮೂಲಗಳ ಭಂಡಾರದಲ್ಲಿ ಪುಸ್ತಕಗಳು, ವಿಜ್ಞಾನ ಪ್ರಯೋಗಾಲಯದ ಉಪಕರಣಗಳು, ಗಣಿತದ ಕಿಟ್, ಅಂತರ್ಜಾಲ ಸೌಲಭ್ಯ ಹೊಂದಿರುವ ಕಂಪ್ಯೂಟರ್‌ಗಳು ಹಾಗೂ ಇನ್ನಿತರ ಬೋಧನೆ ಮತ್ತು ಕಲಿಕಾ ಸಾಮಗ್ರಿಗಳು (Teaching Learning Materials- TLM) ಸೇರಿದ್ದು ಈ ಎಲ್ಲ ಸಂಪನ್ಮೂಲಗಳು ಎಟಕುವಂತಿವೆ.

ಟಿಎಲ್ಸಿಯು ಸಹ ಶಿಕ್ಷಕರೊಂದಿಗಿನ ಕಲಿಕೆ, ಸ್ವ–ಕಲಿಕೆ ಮತ್ತುತಜ್ಞ–ನಿರ್ದೇಶಿತ ಕಲಿಕೆಗಳನ್ನು ಅಭಿವೃದ್ಧಿ ಪಡಿಸುವುದರ ಮೂಲಕ ಶಿಕ್ಷಕ ಸಮುದಾಯದ ವೃತ್ತಿಪರ ಅಭಿವೃದ್ಧಿಗೆ ಅವಕಾಶವನ್ನು ಕಲ್ಪಿಸಿ ಕೊಡುತ್ತದೆ.

ಇದು ಶಿಕ್ಷಕರಿಗೆ ತಮ್ಮ ಪರಿಕಲ್ಪನಾತ್ಮಕ, ತಾಂತ್ರಿಕ ಹಾಗೂ ಮಾನವ ಸಂಬಂಧ ಕೌಶಲ್ಯಗಳನ್ನು ಹರಿತಗೊಳಿಸಿಕೊಳ್ಳಲು ಅವಕಾಶ ಒದಗಿಸುತ್ತದೆ.

ಟಿಎಲ್ಸಿಯು ಶಿಕ್ಷಕರಿಗೆ ತಮ್ಮ ಅನುಭವಗಳನ್ನು ಹಂಚಿಕೊಳ್ಳಲು ಹಾಗೂ ಪರಸ್ಪರರಿಂದ ಕಲಿಯಲು ಅಸಾಂಪ್ರದಾಯಿಕ ಸ್ಥಳಾವಕಾಶವನ್ನು ಕೂಡ ಒದಗಿಸುತ್ತದೆ.

**ಲಭ್ಯವಿರುವ ಶೈಕ್ಷಣಿಕ ಸಂಪನ್ಮೂಲಗಳು**

ಟಿಎಲ್ಸಿಯೊಂದರಲ್ಲಿ ಸಾಧಾರಣವಾಗಿ ಈ ಕೆಳಗಿನ ಸಂಪನ್ಮೂಲಗಳು ಲಭ್ಯವಿರುತ್ತವೆ:

ಪುಸ್ತಕಗಳು ಮತ್ತು ನಿಯತಕಾಲಿಕೆಗಳು – ವಸ್ತುವಿಷಯ, ಪರಾಮರ್ಶನ, ಕತೆಗಳು, ವಿಶ್ವಕೋಶಗಳು, ನಿಘಂಟು–ಶಬ್ದಕೋಶಗಳು, ಶೈಕ್ಷಣಿಕ ವರದಿಗಳು, ಶೈಕ್ಷಣಿಕ ನೀತಿನಿಯಮಗಳ ದಾಖಲೆಗಳು, ನಿಯತಕಾಲಿಕೆಗಳು, ದಿನಪತ್ರಿಕೆಗಳು

ಉಪಕರಣ ಮತ್ತು TLMs –ರಸಾಯನ ಶಾಸ್ತ್ರ, ಭೌತಶಾಸ್ತ್ರ, ಜೀವಶಾಸ್ತ್ರ, ಭೂಗೋಲಶಾಸ್ತ್ರ ಹಾಗೂ ಖಗೋಳ ಶಾಸ್ತ್ರಗಳಲ್ಲಿನ ಕಲಿಕೆಯನ್ನು ಉತ್ತಮಪಡಿಸಲು ಬಳಸಬಹುದಾದ ಉಪಕರಣಗಳು

TLM ಗಳನ್ನು ಅಭಿವೃದ್ಧಿ ಪಡಿಸಲು ಬೇಕಾದ ಕಚ್ಚಾ ಸಾಮಗ್ರಿಗಳು – ತರಗತಿಕೋಣೆಗಳಲ್ಲಿನ ಉಪಯೋಗಕ್ಕಾಗಿ TLM ಗಳನ್ನು ಅಭಿವೃದ್ಧಿ ಪಡಿಸಲು ಶಿಕ್ಷಕರು ಬಳಸುವ ಸಾಮಗ್ರಿಗಳು

ವಿದ್ಯುನ್ಮಾನ (ಡಿಜಿಟಲ್) ಸಾಮಗ್ರಿಗಳು –ಅಂತರ್ಜಾಲಸಹಿತ ಕಂಪ್ಯೂಟರ್‌ಗಳು, ಇ–ಸಂಪನ್ಮೂಲಗಳು (ಲೇಖನ, ವೀಡಿಯೋ, ಶೈಕ್ಷಣಿಕ ಅನುಸಂಧಾನಗಳ ತಂತ್ರಾಂಶ, ಶೈಕ್ಷಣಿಕ ವೀಡಿಯೋಗಳ ವಿದ್ಯುನ್ಮಾನ ಪ್ರತಿಗಳು)

ಬಿಡುವು ಮತ್ತು ಮನರಂಜನೆಯ ಸಾಮಗ್ರಿಗಳು –ಶಟ್ಲ್‌ಕಾಕ್, ವಾಲಿಬಾಲ್, ಚೆಸ್, ಕೇರಂಇತ್ಯಾದಿ

ಮಾನವ ಸಂಪನ್ಮೂಲಗಳು –ವಿಷಯ ಸಂಪನ್ಮೂಲ ವ್ಯಕ್ತಿಗಳು ಹಾಗೂ ಸಂಪನ್ಮೂಲ ಶಿಕ್ಷಕರು

ಟಿಎಲ್ಸಿಯು ಹೇಗೆ ಕಾರ್ಯ ನಿರ್ವಹಿಸುತ್ತದೆ?

ಟಿಎಲ್ಸಿಗಳು ವಾರದ ದಿನಗಳಲ್ಲಿ ಸಂಜೆ 4.00 ಗಂಟೆಯಿಂದ ರಾತ್ರಿ8.00 ಗಂಟೆಯವರೆಗೆ ಹಾಗೂ ವಾರಾಂತ್ಯಗಳಲ್ಲಿ ಬೆಳಿಗ್ಗೆ 10.00 ಗಂಟೆಯಿಂದ ರಾತ್ರಿ 8.00 ಗಂಟೆಯವರೆಗೆ ತೆರೆದಿದ್ದು ಶಿಕ್ಷಕರು ತಮ್ಮ ಬಿಡುವಿನ ವೇಳೆಯಲ್ಲಿ ಈ ಸೌಲಭ್ಯಗಳನ್ನು

ಉಪಯೋಗಿಸಿಕೊಳ್ಳುವಂತೆ ಮಾಡಲಾಗಿದೆ. ಔಪಚಾರಿಕ ಹಾಗೂ ಅನೌಪಚಾರಿಕ ಸ್ವರೂಪದ ಚಟುವಟಿಕೆಗಳೆರಡನ್ನೂ ಯೋಜಿಸಲಾಗಿದೆ. ಕಾರ್ಯಾಗಾರಗಳು, ವಿಚಾರಸಂಕಿರಣ, ಸಮಾವೇಶಗಳು ಹಾಗೂ ನಿರ್ದಿಷ್ಟ ಭೌಗೋಳಿಕ ಪ್ರದೇಶದ ಮಕ್ಕಳು ನಿರ್ದಿಷ್ಟ ವಿಷಯದ ಕುರಿತಾಗಿ ಕೈಗೊಂಡ ತರಗತಿಕೋಣೆ ಕಾರ್ಯಯೋಜನೆಗಳ ಪ್ರದರ್ಶನಗಳು ಔಪಚಾರಿಕ ಚಟುವಟಿಕೆಗಳಲ್ಲಿ ಸೇರಿವೆ. ಅನೌಪಚಾರಿಕ ಭೇಟಿಗಳು, ಸಾಮಗ್ರಿಗಳನ್ನು ಎರವಲು ಪಡೆಯುವುದು, ಶಿಕ್ಷಕರ ಸ್ವಯಂಸೇವಾ ವೇದಿಕೆಗಳು, ಸಹ ಶಿಕ್ಷಕರ ಜೊತೆಚರ್ಚೆ, ಸಾಯಂಕಾಲದ ಚರ್ಚೆಗಳು, ಸ್ವ–ಕಲಿಕೆ ಮುಂತಾದವುಗಳನ್ನು ಅನೌಪಚಾರಿಕ ಚಟುವಟಿಕೆಗಳೆಂದು ವರ್ಗೀಕರಿಸಲಾಗಿದೆ. ಅನೌಪಚಾರಿಕ ಸ್ಥಳಾವಕಾಶವು ನಿರಂತರತೆ, ಸಂಪರ್ಕಗಳನ್ನು ಸೃಷ್ಟಿಸುತ್ತದೆ ಹಾಗೂ ಶಿಕ್ಷಕರ ಜ್ಞಾನ, ಮನೋಭಾವ ಹಾಗೂ ಕೌಶಲ್ಯಗಳ ಅವಶ್ಯಕತೆ–ಆಧಾರಿತ ವರ್ಧನೆಗೆ ಗಮನವನ್ನು ನೀಡುತ್ತದೆ.

ಟಿಎಲ್ಸಿಗಳಲ್ಲಿ ಕಾರ್ಯಾಗಾರಗಳನ್ನು ನಿಯಮಿತವಾಗಿ ಹಮ್ಮಿಕೊಳ್ಳಲಾಗುತ್ತದೆ. ಕೆಲವು ಕಾರ್ಯಾಗಾರಗಳು 5 ದಿನಗಳ ಅವಧಿಯದ್ದೂ ಆಗಿರುತ್ತವೆ. ಇಂತಹ ಕಾರ್ಯಾಗಾರಗಳು ವಿಷಯವನ್ನು ಆಳವಾಗಿ ಅರ್ಥೈಸಿಕೊಳ್ಳಲು ನೆರವಾಗುವ ನಿಟ್ಟಿನಲ್ಲಿ ಪ್ರಯತ್ನಿಸುತ್ತವೆ ಹಾಗೂ ಶಿಕ್ಷಕರು ತಮ್ಮ ಕಲಿಕೆಯ ಕುರಿತಾಗಿ ಪರ್ಯಾಲೋಚಿಸುವುದನ್ನು ಪ್ರೋತ್ಸಾಹಿಸುತ್ತವೆ. ನಿಯಮಿತರೂಪದಲ್ಲಿ ಸಂಘಟಿಸಲ್ಪಡುವ ವಿಚಾರಸಂಕಿರಣ ಹಾಗೂ ಸಮಾವೇಶಗಳು ಶಿಕ್ಷಕರು ಸಂಶೋಧನೆಯನ್ನು ಕೈಗೊಳ್ಳುವಂತೆ, ತಮ್ಮ ಪ್ರಬಂಧಗಳನ್ನು ಮಂಡಿಸುವಂತೆ ಪ್ರೋತ್ಸಾಹಿಸುತ್ತವೆ ಹಾಗೂ ವಿಷಯ ತಜ್ಞರೊಡನೆ ವ್ಯವಹರಿಸಲು ಅವರಿಗೆ ಸಹಾಯಮಾಡುತ್ತವೆ.

ಪ್ರತೀದಿನ ಪ್ರತೀ ಟಿಎಲ್ಸಿಗೆ ಸರಾಸರಿ ಹತ್ತರಿಂದ ಹದಿನೈದು ಶಿಕ್ಷಕರು ಓದಲು, ತರಗತಿ ಕೋಣೆಗಳಿಗೆ ಸಾಮಗ್ರಿಗಳನ್ನು ಎರವಲು ಪಡೆಯಲು, ಅಂತರ್ಜಾಲವನ್ನು ಬಳಸಲು ಹಾಗೂ ಸಹಶಿಕ್ಷಕರೊಡನೆ ಒಡನಾಡಲು ಭೇಟಿ ನೀಡುತ್ತಾರೆ. ಪ್ರತೀ ವಿಷಯಕ್ಕೆ ನಿರ್ದಿಷ್ಟವಾದ ಶಿಕ್ಷಕರ ಸ್ವಪ್ರೇರಣಾತ್ಮಕ ವೇದಿಕೆಯೊಂದನ್ನು ಪ್ರತೀ ತಿಂಗಳು ನಿಗದಿತ ವಾರಾಂತ್ಯದಲ್ಲಿ ಆಯೋಜಿಸಲಾಗುತ್ತದೆ. ಈ ವೇದಿಕೆಗಳು, ನಿರ್ದಿಷ್ಟ ವಿಷಯವನ್ನು ಬೋಧಿಸುವ20–25 ಶಿಕ್ಷಕರಿಗೆ ಒಂದೆಡೆ ಸೇರಿ, ಟಿಎಲ್ಸಿಯಲ್ಲಿ ಲಭ್ಯವಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ವಿಷಯವನ್ನು ಆಳವಾಗಿ ಅನ್ವೇಷಿಸಲು, ಅರಿತುಕೊಳ್ಳಲು ನೆರವಾಗುತ್ತವೆ. ಬಹುತೇಕವಾಗಿ ಪ್ರತಿಷ್ಠಾನದ ಸಂಪನ್ಮೂಲ ವ್ಯಕ್ತಿಯೊಬ್ಬರು ಸುಗಮಕಾರರಾಗಿ ಈ ವೇದಿಕೆಗಳನ್ನು ನಿರ್ವಹಿಸುತ್ತಾರೆ. ಸಾಧಾರಣವಾಗಿ ವೇದಿಕೆಯು ಮೂರರಿಂದ ಐದು ಗಂಟೆಗಳ ಕಾಲ ಚಟುವಟಿಕೆಯಲ್ಲಿರುತ್ತದೆ. ವ್ಯಾಪಕ ಸ್ವರೂಪದ ಶೈಕ್ಷಣಿಕ ಸಂವಾದಗಳ ಮೇಲೆ ಬೆಳಕು ಚೆಲ್ಲುವ ಸಾಯಂಕಾಲದ ಚರ್ಚೆಗಳು ಶಿಕ್ಷಕರನ್ನು ಸಂಕ್ಷಿಪ್ತ ಅವಧಿಗೆ (ಪ್ರತೀ ಸಭೆಗೆ ಎರಡು ಗಂಟೆಗಳ ಕಾಲ) ಚಟುವಟಿಕೆಗಳಲ್ಲಿ ತೊಡಗಿಸುವ ಇನ್ನೊಂದು ವಿಧಾನವಾಗಿರುತ್ತದೆ. ಇಲ್ಲಿ ಶಿಕ್ಷಕರು, ಚರ್ಚೆ ಮಾಡಬೇಕಾದ ವಿಷಯಗಳ ಮೇಲಿನ ಆಯ್ದ ಲೇಖನಗಳನ್ನು ಓದಿರುತ್ತಾರೆ. ಟಿಎಲ್ಸಿ ಸಂಪನ್ಮೂಲಗಳನ್ನು ಮುಂದಿನ ತರಗತಿಗೆ ಸಿದ್ಧತೆ ಮಾಡಿಕೊಳ್ಳುವುದಕ್ಕಾಗಿ ಕೂಡ ಬಳಸಲಾಗುತ್ತದೆ.

**ಕಲಿಕೆಯ ಕೇಂದ್ರಗಳಾಗಿ ಟಿಎಲ್ಸಿ**

ಟಿಎಲ್ಸಿಗಳು ಕಲಿಕೆಯ ತಾಣಗಳಾಗಿ ಬೆಳೆದಿವೆ. ಅಲ್ಲಿ ನಿರ್ದಿಷ್ಟವಾದ ಪಟ್ಟಣದಿಂದ ಬಂದ ಶಿಕ್ಷಕರು ಒಂದಾಗಿ ಶಿಕ್ಷಕರಿಂದಲೇ ಗುರುತಿಸಲ್ಪಟ್ಟ ವಿಷಯಗಳನ್ನು ಕುರಿತಂತೆ ಕಲಿಯುತ್ತಾರೆ. ಸಾಯಂಕಾಲದ ಚರ್ಚೆ ಹಾಗೂ ಸ್ವಪ್ರೇರಣಾತ್ಮಕ ವೇದಿಕೆಗಳಿಗೆ ಕಾರ್ಯಕ್ರಮವನ್ನು ಸಿದ್ಧಗೊಳಿಸುತ್ತಾರೆ. ಟಿಪ್ಪಣಿ ಹಾಗೂ ಸಾಂಪ್ರದಾಯಿಕ ರೀತಿಯ TLMಗಳನ್ನು ತಯಾರಿಸುವುದರ ಜೊತೆಗೆ ಶಿಕ್ಷಕರು ತರಗತಿ ಕೋಣೆಗಳಲ್ಲಿ ಬಳಸಲು ವೀಡಿಯೋ ಚಿತ್ರಗಳನ್ನು ಕೂಡ ತಯಾರಿಸಿದ್ದಾರೆ. ಗುಂಪಿನಲ್ಲಿ ಕೆಲಸ ಮಾಡುವುದರಿಂದ ಅವರ ನಡುವೆ ಸಂಬಂಧವು ಬೆಳೆಯುತ್ತದೆ ಹಾಗೂ ಇದು ಪರಸ್ಪರರಿಂದ ಕಲಿಯಲು ಅವರಿಗೆ ನೆರವಾಗುತ್ತದೆ.

ನಿರಂತರತೆ ಹಾಗೂ ಪ್ರಸ್ತುತತೆ

ಟಿಎಲ್ಸಿಯ ಚಟುವಟಿಕೆಗಳು ಸರ್ಕಾರೀ ಶಾಲೆಗಳಲ್ಲಿ ಸಾಧಾರಣವಾಗಿ ಕಂಡುಬರುವ ಶಿಕ್ಷಕ ತರಬೇತಿಯ ಕೊರತೆಗಳನ್ನು ತುಂಬಿಸುತ್ತವೆ. ಟಿಎಲ್ಸಿಗಳು ಸೂಕ್ತವಾದ ಶೈಕ್ಷಣಿಕ ಒಳಸುರಿಗಳ ಮೂಲಕ ಕಾರ್ಯಾಗಾರಗಳಿಗೆ ಪೂರಕವಾಗಿ ಕೆಲಸ ಮಾಡುತ್ತವೆ. ಶಿಕ್ಷಕ ಅಭಿವೃದ್ಧಿಗೆ ಸಂಬಂಧಿಸಿದ ನಿರ್ವಹಣಾ ಕಾರ್ಯಗಳು ನಿರಂತರವಾಗಿ ತೊಡಗುವಿಕೆಯ ಪ್ರಕ್ರಿಯೆಗಳಾಗಿದ್ದು ಅವುಗಳಿಗೆ ಸತತ ಹಿಮ್ಮಾಹಿತಿಯ ಹಾಗೂ ನಿಯಮಿತ ಪರ್ಯಾಲೋಚನೆಯ ಅಗತ್ಯವಿದೆ. ಹರಡಿಹೋದ ಹಾಗೂ ಪ್ರತ್ಯೇಕಗೊಳಿಸಿದ ತರಬೇತಿಯು ಪರಿಕಲ್ಪನೆಯೊಂದನ್ನು ಶಿಕ್ಷಕರು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳುವುದಕ್ಕೆ ಅಗತ್ಯವಾದ ನೆರವನ್ನು ಮಿತಗೊಳಿಸುತ್ತದೆ ಹಾಗೂ ನಂತರ ಅದನ್ನು ತರಗತಿಕೋಣೆಯಲ್ಲಿ ಪರಿಣಾಮಕಾರಿಯಾಗಿ ಸಂವಹಿಸಲು ಅಗತ್ಯವಾದ ನೆರವನ್ನೂ ಮಿತಗೊಳಿಸುತ್ತದೆ. ಬಹಳಷ್ಟು ಬಾರಿ ಔಪಚಾರಿಕ ತರಬೇತಿಗೆ ಪರಿಗಣಿಸಲಾಗಿರುವ ವಿಷಯಗಳೂ ಶಿಕ್ಷಕರ ತರಗತಿಕೋಣೆಯ ಅಗತ್ಯಗಳೊಂದಿಗೆ ನೇರವಾಗಿ ಸಂಬಂಧ ಹೊಂದಿರುವುದಿಲ್ಲ.

ಈ ಗೋಷ್ಠಿಗಳು ಎಲ್ಲಾ ವೇಳೆಯೂ ಶಿಕ್ಷಕರಿಗೆ ತಮ್ಮ ಕೌಶಲ್ಯಗಳನ್ನು ಸಮಗ್ರವಾಗಿ ಅಭಿವೃದ್ಧಿಪಡಿಸಿಕೊಳ್ಳಲು ನೆರವಾಗದೇ ಹೋಗಬಹುದು. ಆದ್ದರಿಂದ, ಶಿಕ್ಷಕ ಅಭಿವೃದ್ಧಿ ಕಾರ್ಯಕ್ರಮಗಳು ಭೌಗೋಳಿಕ ಮತ್ತು ವ್ಯಕ್ತಿಗತ ಅಗತ್ಯಗಳಿಗೆ ತಕ್ಕಂತೆ ಸಾಂದರ್ಭಿಕವೂ ಪ್ರಸ್ತುತವೂ ಆಗಬೇಕಾದ ಅವಶ್ಯಕತೆಯಿದೆ. ಅಲ್ಲದೇ ಸ್ವ–ಕಲಿಕೆ, ಸಹ ಶಿಕ್ಷಕರಿಂದ ಕಲಿಕೆ, ನಿರ್ದೇಶಿತ ಕಲಿಕೆ, ಅಗತ್ಯ ಆಧಾರಿತ ಚರ್ಚೆಗಳು, ಪ್ರಾತ್ಯಕ್ಷಿಕೆ ಮುಂತಾದ ಅನೌಪಚಾರಿಕ (ಅಸಾಂಪ್ರದಾಯಿಕ) ವಿಧಾನಗಳ ಮೂಲಕ ಅಭಿವೃದ್ಧಿಯು ನಿರಂತರವಾಗಿರುವುದಕ್ಕೆ ಅವಕಾಶವನ್ನು ಒದಗಿಸಬೇಕಾಗಿದೆ. ತರಬೇತಿಯ ವಸ್ತು ವಿಷಯವನ್ನು ತಲುಪಿಸಲು ವಿವಿಧ ರೀತಿಯ ವಿಧಾನಗಳನ್ನು (ಬೋಧನೆ, ಉಪನ್ಯಾಸದ ಮಾದರಿಯೊಂದೇಅಲ್ಲದೇ) ಬಳಸಬೇಕಾದ ಅಗತ್ಯವಿದೆ.

**ಲಭ್ಯವಿರುವ ಸಂಪನ್ಮೂಲಗಳನ್ನು ತೊಡಗಿಸಿಕೊಳ್ಳುವುದು:**

ಟಿಎಲ್ಸಿಗಳು ಶಿಕ್ಷಕರಿಗೆ ಭೌತಿಕ ಹಾಗೂ ವಿದ್ಯುನ್ಮಾನ (ಡಿಜಿಟಲ್) ಸಾಮಗ್ರಿಗಳೆರಡನ್ನೂ ಒದಗಿಸುತ್ತದೆ ಹಾಗೂ ಹೆಚ್ಚುವರಿ ಸಂಪನ್ಮೂಲಗಳನ್ನು, ತರಗತಿಕೋಣೆಗೆ ಅಗತ್ಯವಾದ TLM ಗಳನ್ನು ಬಳಸಿಕೊಳ್ಳುವಂತೆ ಪ್ರೋತ್ಸಾಹಿಸುತ್ತದೆ. ನಿರ್ದಿಷ್ಟ ಪಾಠಕ್ಕೆ

ಸೂಕ್ತವಾದ ಉಪಕರಣವನ್ನು ಗುರುತಿಸಲು ಶಿಕ್ಷಕರಿಗೆ ಅನುಕೂಲವಾಗುವಂತೆ ಟಿಎಲ್ಸಿಗಳಲ್ಲಿ ಲಭ್ಯವಿರುವ ಸಾಮಗ್ರಿಗಳನ್ನು ವ್ಯವಸ್ಥಿತವಾಗಿ ಇಡಲಾಗಿದೆ. ಪ್ರಾಥಮಿಕ ಶಾಲೆಗಳಲ್ಲಿನ ಔಪಚಾರಿಕ ಪಠ್ಯಕ್ರಮಗಳನ್ನು ಪರಿಗಣಿಸಿ ಅದೇ ರೀತಿಯಲ್ಲಿ ಎಲ್ಲಾ ಸಾಮಗ್ರಿಗಳನ್ನು ತರಿಸಿಕೊಳ್ಳಲಾಗುತ್ತದೆ.

ಟಿಎಲ್ಸಿಗಳಲ್ಲಿನ ಅತ್ಯಂತ ಪ್ರಮುಖ ಅಂಶಗಳಲ್ಲಿ ಮೊಟ್ಟ ಮೊದಲನೆಯದು ಕೇಂದ್ರದಲ್ಲಿ ನಡೆಯುವ ಶೈಕ್ಷಣಿಕ ಚಟುವಟಿಕೆಗಳು. ಎರಡನೆಯದು, ಶಿಕ್ಷಕರನ್ನು ತಲುಪುವುದು. ಕ್ರೀಡೆ–ಆಟೋಟಗಳಲ್ಲಿ ಭಾಗವಹಿಸುವುದು, ಸುದ್ದಿಪತ್ರಿಕೆಗಳನ್ನು ಓದುವುದು, ಶೈಕ್ಷಣಿಕವಲ್ಲದ ವೀಡಿಯೋಗಳನ್ನು ನೋಡುವುದು, ಸಾಮಾನ್ಯ ವಿಷಯಗಳ ಮೇಲೆ ಪರಸ್ಪರ ಮಾತುಕತೆಯಲ್ಲಿ ತೊಡಗುವುದು ಮುಂತಾದ ಶೈಕ್ಷಣಿಕ ಸ್ವರೂಪದ್ದಲ್ಲದ ಹಲವಾರು ಚಟುವಟಿಕೆಗಳು ಅಲ್ಲಿ ಇರಬಹುದು. ಔಪಚಾರಿಕವಾಗಿ ಆಯೋಜಿಸಿದ ಶೈಕ್ಷಣಿಕ ಚಟುವಟಿಕೆಗಳು ಟಿಎಲ್ಸಿಗಳ ಕೇಂದ್ರಬಿಂದುವಾಗಿದೆ. ಅದೇ ವೇಳೆಗೆ ಶಿಕ್ಷಣ, ಮಕ್ಕಳು, ಶಾಲೆ, ಕಲಿಕೆ, ಬೋಧನೆ, ವಸ್ತುವಿಷಯ, ಬೋಧನಾಕ್ರಮಗಳ ಅರಿವಿನ ಕುರಿತಂತೆ ನಡೆಯುವ ಅನೌಪಚಾರಿಕ ಚರ್ಚೆಗಳು ಶಿಕ್ಷಕರಿಗೆ ತಮ್ಮ ಪಾತ್ರದ ಜೊತೆ ಸಂಬಂಧವನ್ನು ಹೊಂದಲು ಹಾಗೂ ಶಿಕ್ಷಕರಾಗಿ ತಮ್ಮ ದೈನಂದಿನ ಕಾರ್ಯಗಳಲ್ಲಿ ತಾವು ಕಲಿತ ಪಾಠಗಳನ್ನು ಆಚರಣೆಯಲ್ಲಿ ತರಲು, ಅನ್ವಯಿಸಲು ಅನುವು ಮಾಡಿಕೊಡುತ್ತವೆ.

ಸಹಶಿಕ್ಷಕರ ಗುಂಪುಗಳು ಸ್ಥಳೀಯ ಚಹ ಅಂಗಡಿ, ದೇವಸ್ಥಾನ, ಶಿಕ್ಷಣ ಸಂಸ್ಥೆಗಳ ಆವರಣ ಮುಂತಾದ ಬೇರೆ ಬೇರೆ ಸ್ಥಳಗಳಲ್ಲಿ ನಿಯಮಿತವಾಗಿ ಸಭೆ ಸೇರುತ್ತವೆ ಅಥವಾ ತಮಗೋಸ್ಕರವೇ ವಿಚಾರ ಸಂಕಿರಣ, ಚರ್ಚೆ ಇತ್ಯಾದಿ ಕಾರ್ಯಕ್ರಮಗಳನ್ನು ಆಯೋಜಿಸಿಕೊಳ್ಳುತ್ತವೆ. ಪುಸ್ತಕ ಹಾಗೂ TLM ಗಳೊಡನೆ ಶಾಲೆಗಳಿಗೆ ಭೇಟಿ ನೀಡುವುದು, ಮೊದಲು ವಿದ್ಯಾರ್ಥಿಗಳೊಂದಿಗೆ ನಂತರ ಶಿಕ್ಷಕರೊಂದಿಗೆ ಒಡನಾಡುವುದನ್ನು ಉತ್ತೇಜಿಸುತ್ತದೆ. ಒಮ್ಮೆ ಕೆಲವು ಶಿಕ್ಷಕರು ಟಿಎಲ್ಸಿಗೆ ಬರಲು ಆರಂಭಿಸಿದರೆ ಹಾಗೂ ಟಿಎಲ್ಸಿಜೊತೆಗಿನ ಒಡನಾಟವು ತಮ್ಮ ವೃತ್ತಿ ಬೆಳವಣಿಗೆಯ ಮೌಲ್ಯವನ್ನು ಹೆಚ್ಚಿಸುತ್ತದೆ ಎಂದು ಅವರಿಗೆ ತಿಳಿದರೆ, ಅವರು ಮತ್ತಷ್ಟು ಶಿಕ್ಷಕರನ್ನು ಕರೆತರುತ್ತಾರೆ.

ಟಿಎಲ್ಸಿಗಳನ್ನು ನಡೆಸುವುದರಿಂದ ನಾವು ಕಲಿತ ಕೆಲವು ಅಂಶಗಳು ಈ ಕೆಳಗಿನಂತಿವೆ,

100 ಕ್ಕಿಂತಲೂ ಹೆಚ್ಚು ಶಿಕ್ಷಕರು ವಾಸಿಸುವ ಪ್ರದೇಶದಲ್ಲಿ ಟಿಎಲ್ಸಿಯು ಇದ್ದರೆ ಅದರ ಬಳಕೆಯು ಹೆಚ್ಚಾಗಿರುತ್ತದೆ. ಟಿಎಲ್ಸಿಯಿಂದ ಮೂರು ಕಿಲೋಮೀಟರ್ ಒಳಗೆ ಇರುವ ಶಿಕ್ಷಕರು ಹೆಚ್ಚು ಬಾರಿ ಅಲ್ಲಿಗೆ ಭೇಟಿ ನೀಡುತ್ತಾರೆ. ಎಲ್ಲಾ ಸಾಮಗ್ರಿಗಳನ್ನು ಎಟಕುವಂತೆ ಮುಕ್ತವಾಗಿ ಇಡುವುದು ಅತ್ಯಂತ ಮುಖ್ಯ.

ಪ್ರತೀ ವಿಷಯಕ್ಕೂ ನಿಗದಿತ ಸಂಪನ್ಮೂಲ ವ್ಯಕ್ತಿಗಳು ಇರುವಂತೆ ನೋಡಿಕೊಳ್ಳುವುದರ ಜೊತೆಗೆ, ಕುಳಿತುಕೊಳ್ಳಲು ಸಾಕಷ್ಟು ಸ್ಥಳಾವಕಾಶ, ಸ್ವಚ್ಛ ಪರಿಸರ, ಕುಡಿಯುವ ನೀರು, ಶೌಚಾಲಯ ಸೌಲಭ್ಯ, ಗುಣಮಟ್ಟದ ಕಲಿಕೆ ಸಾಮಗ್ರಿಗಳು, ವಿವಿಧ ಪ್ರಕಾರದ

ಪುಸ್ತಕಗಳು, ಕಂಪ್ಯೂಟರ್‌ಗಳು, ನಿರಂತರ ವಿದ್ಯುಚ್ಛಕ್ತಿ ಪೂರೈಕೆ, ಮನರಂಜನೆ ಮತ್ತು ಬಿಡುವಿನ ಸಾಮಗ್ರಿಗಳು ಇತ್ಯಾದಿ ಗುಣಮಟ್ಟದಕಲಿಕೆಯ ವಾತಾವರಣವು ಟಿಎಲ್ಸಿಗಳ ಯಶಸ್ಸಿಗೆ ಅತ್ಯಂತ ಮುಖ್ಯ.

ತಮ್ಮ ವೃತ್ತಿಯ ಬೆಳವಣಿಗೆಯ ನಿಟ್ಟಿನಲ್ಲಿ ಹೊಣೆಗಾರಿಕೆಯ ಭಾವದಿಂದ ಸ್ವಯಂಪ್ರೇರಿತರಾಗಿ ಬರುವ ಶಿಕ್ಷಕರು ಟಿಎಲ್ಸಿಯಲ್ಲಿ ಚೈತನ್ಯ ಹಾಗೂ ಸ್ಪಂದನಶೀಲತೆಯನ್ನು ಉಂಟು ಮಾಡುತ್ತಾರೆ.

ಟಿಎಲ್ಸಿಗಳು ಶಿಕ್ಷಕ ಅಭಿವೃದ್ಧಿ ಚಟುವಟಿಕೆಗಳ ಅವಿಭಾಜ್ಯ ಅಂಗವಾಗಬಹುದು. ಅಂತೆಯೇ ಅವು ಪ್ರತ್ಯೇಕವಾಗಿಯೂ ಕಾರ್ಯ ನಿರ್ವಹಿಸಬಹುದು.

ಟಿಎಲ್ಸಿಗಳಲ್ಲಿನ ಚಟುವಟಿಕೆಗಳು ತರಗತಿ ಕೋಣೆಯ ಅಗತ್ಯಗಳಿಗೆ ನೇರವಾಗಿ ಸಂಬಂಧಿಸಿರಬೇಕು ಹಾಗೂ ಅವು ಶಿಕ್ಷಕರ ವೃತ್ತಿಪರ ಅಭಿವೃದ್ಧಿಯನ್ನು ಪ್ರೋತ್ಸಾಹಿಸಬೇಕು. ಹಾಗಿದ್ದಾಗ ಮಾತ್ರ ಶಿಕ್ಷಕರನ್ನು ನಿರಂತರವಾಗಿ ಕೇಂದ್ರಗಳಿಗೆ ಭೇಟಿ ಕೊಡುವಂತೆ ಉತ್ತೇಜಿಸಬೇಕು.

ಸಮಯದ ಅಗತ್ಯವನ್ನು ಆಧರಿಸಿ ಟಿಎಲ್ಸಿಗಳು ನಿಯಮಿತವಾಗಿ ಸುಧಾರಣೆಗಳನ್ನು ಮಾಡಿಕೊಳ್ಳಬೇಕು.

ಟಿಎಲ್ಸಿಗಳು ಶಿಕ್ಷಕರನ್ನು ತೊಡಗಿಸಿಕೊಳ್ಳಲು ಪರಿಣಾಮಕಾರಿಯಾದ ವಿಧಾನ. ಏಕೆಂದರೆ, ಅವು ಶಿಕ್ಷಕರನ್ನು ತಮ್ಮ ವೃತ್ತಿಪರ ಅಭಿವೃದ್ಧಿಗೆ ತಾವೇ ಸ್ವಯಂಪ್ರೇರಣೆಯಿಂದ ಹೊಣೆಗಾರರಾಗುವಂತೆ ಮಾಡುತ್ತವೆ. ಶಿಕ್ಷಕರು ತಮ್ಮ ವೃತ್ತಿಪರ ಅಭಿವೃದ್ಧಿಯ ಹೊಣೆಯನ್ನು ಹೇಗೆ ಹೊತ್ತರು ಎನ್ನುವುದನ್ನು ವರ್ಣಿಸುವ ಹಲವಾರು ನೈಜ ಕತೆಗಳಿವೆ. ಯಾದಗೀರ್ ಜಿಲ್ಲೆಯಲ್ಲಿ ನಡೆಸಿದ ಅಧ್ಯಯನವೊಂದು ಟಿಎಲ್ಸಿಗಳು ಶಿಕ್ಷಕರಲ್ಲಿ ಧನಾತ್ಮಕ ಬದಲಾವಣೆಗಳನ್ನು ತಂದ ಸಂಗತಿಯನ್ನು ಶೋಧಿಸಿ ತೋರಿಸಿವೆ. ಟಿಎಲ್ಸಿಗಳು ಶಿಕ್ಷಕರು ತಮ್ಮ ವಿಷಯ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಹಾಗೂ ದೈನಂದಿನ ಶಾಲಾ ಬದುಕಿನಲ್ಲಿ ತರಗತಿಕೋಣೆಯಲ್ಲಿ ಶಿಶು–ಸ್ನೇಹೀ ಆಚರಣೆಗಳನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಅಳವಡಿಸಿಕೊಳ್ಳಲು ಪ್ರೋತ್ಸಾಹಿಸಿವೆ. ಟಿಎಲ್ಸಿಗಳ ಉಪಯೋಗದ ಮುಂದುವರಿಕೆಯು ವಿದ್ಯಾರ್ಥಿಗಳ ಕಲಿಕೆಯ ಗುಣಮಟ್ಟವನ್ನು ವರ್ಧಿಸುತ್ತದೆ ಎಂಬ ಭರವಸೆಯಿದೆ.

ರುದ್ರೇಶ್ ಅವರು ಕರ್ನಾಟಕದ ಕಲಬುರ್ಗಿ ಮತ್ತು ಯಾದಗೀರ್‌ಗಳಲ್ಲಿರುವ ಆಜೀಂ ಪ್ರೇಮ್‌ಜಿ ಪ್ರತಿಷ್ಠಾನದ ಜಿಲ್ಲಾ ಸಂಸ್ಥೆಯ ಮುಖ್ಯಸ್ಥರಾಗಿದ್ದಾರೆ. ಅವರು ಸಾಮಾಜಿಕ ಕಾರ್ಯ ವಿಷಯದಲ್ಲಿ ಗುಲಬರ್ಗಾ ವಿಶ್ವವಿದ್ಯಾನಿಲಯದಿಂದ ಸ್ನಾತಕೋತ್ತರ ಪದವಿ

ಪಡೆದಿದ್ದು ಕಳೆದ ಹದಿಮೂರು ವರುಷಗಳಿಂದ ಆಜೀಂ ಪ್ರೇಮ್‌ಜಿ ಪ್ರತಿಷ್ಠಾನದಲ್ಲಿ ಕೆಲಸ ಮಾಡುತ್ತಿದ್ದಾರೆ. ಶಿಕ್ಷಕರ ಹಾಗೂ ಕಾರ್ಯನಿರ್ವಾಹಕರ ಸಾಮರ್ಥ್ಯ ನಿರ್ಮಾಣ ಪ್ರಯತ್ನದ ಪರಿಕಲ್ಪನೆ, ಅನುಷ್ಠಾನದಲ್ಲಿ ಹಾಗೂ ಸರ್ಕಾರದ ಜೊತೆಗಿನ ಸಂಬಂಧವನ್ನು ನಿಭಾಯಿಸುವುದರಲ್ಲಿ ಅವರ ಹೊಣೆಗಾರಿಕೆಯಿದೆ. ಅವರನ್ನು rudresh@azimpremjifoundation.org ಮೂಲಕ ಸಂಪರ್ಕಿಸಬಹುದು.